


# ಜ್ಯೋತಿಷ್ಯ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1309   03-04-2022   ಭಾನುವಾರ**

ಶುಭಕೃತ್ ಸಂವತ್ಸರ ಉತ್ತರಾಯಣ ವಸಂತಋತು ಚೈತ್ರಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
| --- | --- |
| ತಿಥಿ : ಬಿದಿಗೆ (12:37)<br>ನಕ್ಷತ್ರ : ಅಶ್ವಿನೀ (12:36)<br>ರಾಹುಕಾಲ :<br>05:09 PM - 06:41 PM<br>ಗುಳಿಕಕಾಲ :<br>03:37 PM - 05:09 PM | ಜೀವನದಲ್ಲಿ ಖುಷಿಯಾಗಿ ಇರಬೇಕು ಅಂದ್ರೆ ಯಾರಿಂದಲೂ ಏನನ್ನು ಬಯಸಬಾರದು. |






# ವಾಸ್ತು ಪ್ರಕಾರ

- ಮನೆಗಳಲ್ಲಿ ದೀಪ ಬೆಳಗಿದಷ್ಟು ಒಳ್ಳೆಯದು. ಕತ್ತಲೆ ಶನೇಶ್ವರನ ಸಂಕೇತ. ಹೆಚ್ಚು ಕತ್ತಲೆ ಇರುವಂತಹ ಕಟ್ಟಡಗಳಲ್ಲಿ ಹೆಚ್ಚಿನ ತೊಂದರೆಗಳು ಎದುರಾಗುತ್ತಿರುತ್ತದೆ.
- ಬೆಳಗ್ಗೆ 9 ಗಂಟೆ 40 ನಿಮಿಷದವರೆಗೆ ಸೂರ್ಯನ ಕಿರಣಗಳಲ್ಲಿ ಅಯಸ್ಕಾಂತೀಯ ಶಕ್ತಿಗಳು ಹೆಚ್ಚು ಪ್ರಭಾವ ಹೊಂದಿರುವುದರಿಂದ ಬೆಳಗ್ಗಿನ

ಪೂಜೆ ಶ್ರೇಷ್ಠವಾಗಿರುತ್ತದೆ.

- ಪೂರ್ವ ಅಥವಾ ಈಶಾನ್ಯ ದಿಕ್ಕಿನಲ್ಲಿ ಅಡುಗೆ ಕೋಣೆ ಇದ್ದರೆ ಕಣ್ಣಿಗೆ ಸಂಬಂಧಿಸಿದ ಅನಾರೋಗ್ಯ ಸಮಸ್ಯೆಗಳು ಭಾದಿಸುತ್ತದೆ.
- ನೈಋತ್ಯ ಅಥವಾ ಪೂರ್ವಈಶಾನ್ಯ ದಿಕ್ಕಿನಲ್ಲಿ ಅಡುಗೆ ಕೋಣೆ ಇದ್ದರೆ ರಕ್ತದೊತ್ತದಂತಹ ಅನಾರೋಗ್ಯ ಸಮಸ್ಯೆಗಳು ಭಾದಿಸುತ್ತದೆ.
- ನಿವೇಶನದ ಈಶಾನ್ಯಕ್ಕಿಂತ ವಾಯುವ್ಯ ತಗ್ಗಾಗಿದ್ದರೆ ಅಂತಹ ಮನೆಗಳಲ್ಲಿ ವಾಸಿಸುವ ಹೆಂಗಸರಿಗೆ ಹೆದರಿಕೆ ಹೆಚ್ಚಾಗಿರುತ್ತದೆ.
- ಮನೆಯಲ್ಲಿರುವ ಯಾವುದೇ ಕನ್ನಡಿ ಅಲುಗಾಡದಂತೆ ಇರಬೇಕು. ಚೌಕಾಕಾರ ಅಥವಾ ಆಯತಾಕಾರದ ಕನ್ನಡಿ ಮಾತ್ರ ಇರಲಿ.
- ವೆಂಟಿಲೇಶನ್ ಇಲ್ಲದಂತಹ ಮನೆಗಳಲ್ಲಿ ಭಯದ ವಾತಾವರಣವಿರುತ್ತದೆ.

- ಮನೆಯಲ್ಲಿ ಮಾಡುತ್ತಿರುವ ಅಡುಗೆಯು ರಸ್ತೆಗೆ ಅಥವಾ ಮುಖ್ಯದ್ವಾರಕ್ಕೆ ಕಾಣದಂತಿರಲಿ. ಕಾಣುತ್ತಿದ್ದರೆ ವೈಮನಸ್ಸು ಹೆಚ್ಚಾಗುತ್ತದೆ.
- ದೇವಸ್ಥಾನಗಳು ಮತ್ತು ಧಾರ್ಮಿಕ ಮಂದಿರಗಳು ಎತ್ತರ ಭಾಗದಲ್ಲಿರಲಿ.
- ವಾಯುವ್ಯ ಭಾಗದಲ್ಲಿ ತೊಟ್ಟಿ, ಬಾವಿ, ಟ್ಯಾಂಕ್ ಇವುಗಳು ಇದ್ದರೆ ಅಂತಹ ಮನೆಗಳಲ್ಲಿ ವಾಸಿಸುವ ಹೆಣ್ಣುಮಕ್ಕಳಿಗೆ ಮಾನಸಿಕ ಖಿನ್ನತೆ ಇರುತ್ತದೆ.

# ಸ್ತ್ರೀ ಜಾತಕ ವಿಮರ್ಶೆ

# ಶಿಕ್ಷಣ ವಿಚಾರ



| | | | |
|---|---|---|---|
| ರವಿ ಬುಧ ಶುಕ್ರ | ಕುಜ ರಾಹು | | |
| | 08-04-1985 3.30PM | | |
| ಗುರು | ರಾಶಿ ಕುಂಡಲಿ | | ಲಗ್ನ ಮಾಂದಿ |
| | ಚಂದ್ರ ಶನಿ | ಕೇತು | |

ಈ ಜಾತಕಿಯು ಸಿಂಹ ಲಗ್ನದಲ್ಲಿ ಜನನವಾಗಿರುವುದರಿಂದ ಯಾರಿಗೂ ತಲೆ ಬಗ್ಗಿಸದ ಸ್ವಭಾವ, ಸ್ಥಿರವಾದ ಬುದ್ಧಿ, ಸ್ವಲ್ಪ ಹೆಚ್ಚೆನ್ನಬಹುದಾದ ಆತ್ಮಾಭಿಮಾನ, ರಾಜಕೀಯ ನೈಪುಣ್ಯತೆ ಇರುತ್ತದೆ. ವಿದ್ಯಾ ಸ್ಥಾನವಾದ ಚತುರ್ಥದಲ್ಲಿ ದುಸ್ಥಾನಾಧಿಪತಿಗಳಾದ ಶನಿ – ಚಂದ್ರರಿದ್ದು ಬಾಧಕಾಸ್ಥಾನದಲ್ಲಿ ರಾಹುವಿನೊಂದಿಗಿರುವ ಕುಜನಿಂದ ದೃಷ್ಟರಾಗಿರುವರು. ವಿದ್ಯಾಕಾರಕ ಬುಧ ಮತ್ತು ಜ್ಞಾನಕಾರಕ ಗುರು ದುಸ್ಥಾನದಲ್ಲಿ ನೀಚರಾಗಿರುವರು. ನೀಚ ಗುರುವಿಗೆ ಶನಿಯ ದೃಷ್ಟಿ ಇದೆ.

ಜನ್ಮರಾಶಿಯಿಂದ ಚತುರ್ಥಾಧಿಪತಿ ಜನ್ಮ ರಾಶಿಯಲ್ಲಿದ್ದು ಕುಜನಿಂದ ದೃಷ್ಟನು. ವಿದ್ಯಾಕಾರಕನಾದ ಬುಧನು ಪಂಚಮದಲ್ಲಿ ಬುಧಾದಿತ್ಯ ಯೋಗದಲ್ಲಿರುವನು. ಜ್ಞಾನಕಾರಕ ಗುರು ತೃತೀಯ ಭಾವದಲ್ಲಿ ನೀಚನಾಗಿ ಶನಿಯಿಂದ ದೃಷ್ಟನಾಗಿರುವನು.

| | | | |
|---|---|---|---|
| | | ಕೇತು | ಲಗ್ನ ಗುರು ಮಾಂದಿ |
| | ನವಾಂಶ ಕುಂಡಲಿ | | |
| ರವಿ | | | ಚಂದ್ರ ಶನಿ |
| ಶುಕ್ರ | ಕುಜ ಬುಧ ರಾಹು | | |

ನವಾಂಶ ಕುಂಡಲಿಯಲ್ಲಿ ಲಗ್ನದಿಂದ ಚತುರ್ಥಾಧಿಪತಿ ಬುಧನು ಷಷ್ಠಭಾವದಲ್ಲಿ ಕುಜ – ರಾಹು ಯುತಿಯಲ್ಲಿ ಇರುವನು. ಚಂದ್ರನಿಂದ ಚತುರ್ಥದಲ್ಲಿ ಕುಜ – ರಾಹುಗಳಿರುವರು. ಜ್ಞಾನಕಾರಕನಾದ ಗುರುವಿಗೆ ಮಾಂದಿಯುತಿ, ಕುಜನ ದೃಷ್ಟಿ ದೋಷಪ್ರದವಾಗಿದೆ.

ಗ್ರಹಕುಂಡಲಿಯಲ್ಲಿ ವಿದ್ಯಾಸ್ಥಾನಾಧಿಪತಿಗೆ ರಾಹುವಿನ ಯೋಗ, ವಿದ್ಯಾಸ್ಥಾನದಲ್ಲಿ ಶನಿ - ಚಂದ್ರ, ವಿದ್ಯಾ –

ಜ್ಞಾನಕಾರಕರ ದುಸ್ಥಾನದ ನೀಚಸ್ಥಿತಿ, ನವಾಂಶ ಕುಂಡಲಿಯಲ್ಲಿ ವಿದ್ಯಾಸ್ಥಾನಾಧಿಪತಿ - ವಿದ್ಯಾಕಾರಕನಾದ ಬುಧನು ಶತ್ರುಭಾವದಲ್ಲಿ ಕುಜ-ರಾಹುವಿನೊಂದಿಗೆ ಇರುವುದರಿಂದ ಈಕೆಯ ವಿದ್ಯೆ ಭಂಗಗೊಂಡಿತು.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್

ಸಂಪಾದಕರು : ಶ್ರೀಷ ಎಸ್.

ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535

jmonline@gmail.com www.jyothishamithra.com